## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 684(829) |
| ಸದಸ್ಯರ ಹೆಸರು | : ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : 20-12-2021 |
| ಉತ್ತರಿಸುವ ಸಚಿವರು | : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಬಿಸ್ಕೂರು ಗ್ರಾಮದಲ್ಲಿರುವ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರ ಸಂಖ್ಯೆ ಕಡಿಮೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ; | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಬಿಸ್ಕೂರು ಈ ಶಾಲೆಯಲ್ಲಿ 1 ರಿಂದ 5 ನೇ ತರಗತಿಯವರೆಗೆ 55 ವಿದ್ಯಾರ್ಥಿಗಳು, 6 ಮತ್ತು 7 ರಲ್ಲಿ 46 ವಿದ್ಯಾರ್ಥಿಗಳು, ಒಟ್ಟು 101 ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿರುತ್ತಾರೆ.<br><br>ಸದರಿ ಶಾಲೆಯಲ್ಲಿ 04 ಮಂಜೂರಾದ ಶಿಕ್ಷಕರ ಹುದ್ದೆಗಳಿದ್ದು. ಒಬ್ಬ ಶಿಕ್ಷಕರು ಅಕಾಲಿಕ ನಿಧನ ಹೊಂದಿರುತ್ತಾರೆ ಮತ್ತು ಮುಖ್ಯ ಶಿಕ್ಷಕರ ಹುದ್ದೆ ವಯೋನಿವೃತ್ತಿಯಿಂದ ಖಾಲಿಯಾಗಿರುತ್ತದೆ. ಒಟ್ಟು 02 ಹುದ್ದೆಗಳು ಖಾಲಿಯಾಗಿರುತ್ತವೆ.<br><br>ಖಾಲಿಯಾದ 02 ಶಿಕ್ಷಕರ ಹುದ್ದೆಗಳಿಗೆ; 01 ಅತಿಥಿ ಶಿಕ್ಷಕರನ್ನು ನೇಮಕ ಮಾಡಲಾಗಿದೆ ಹಾಗೂ 01 ಶಿಕ್ಷಕರನ್ನು ಮಕ್ಕಳ ಶೈಕ್ಷಣಿಕ ಹಿತದೃಷ್ಟಿಯಿಂದ ನಿಯೋಜನೆ ಮಾಡಲಾಗಿದೆ. ಪ್ರಸ್ತುತ, ಶಾಲೆಯಲ್ಲಿ ಒಟ್ಟು 04 ಶಿಕ್ಷಕರು ಕರ್ತವ್ಯ ನಿರ್ವಹಿಸುತ್ತಿದ್ದು, ಶಿಕ್ಷಕರ ಸಮಸ್ಯೆ ಉಂಟಾಗದಂತೆ ಕ್ರಮ ವಹಿಸಲಾಗಿದೆ. |
| ಆ) | ಸದರಿ ಶಾಲೆಯಲ್ಲಿ ಶೌಚಾಲಯವಿದ್ದು, ಶೌಚಾಲಯ ಉಪಯೋಗಿಸಲು ಯೋಗ್ಯವಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು) | ಸದರಿ ಶಾಲೆಯಲ್ಲಿ ಪ್ರಸ್ತುತ 02 ಶೌಚಾಲಯಗಳು ಸುಸ್ಥಿತಿಯಲ್ಲಿರುತ್ತದೆ. (ಟಯೋಟಾ ಕಂಪನಿಯಿಂದ ನಿರ್ಮಿಸಿಕೊಡಲಾಗಿರುತ್ತದೆ) 02 ಶೌಚಾಲಯಗಳ ದುರಸ್ತಿ ಕಾರ್ಯ ನಡೆಯುತ್ತಿದೆ. 02 ಹೊಸ ಶೌಚಾಲಯಗಳ ನಿರ್ಮಾಣ ಕಾರ್ಯ ಪ್ರಾರಂಭಿಸುವ ಹಂತದಲ್ಲಿದೆ. ಒಟ್ಟಾರೆ. 06 ಶೌಚಾಲಯಗಳನ್ನು ಒದಗಿಸಲು ಕ್ರಮವಹಿಸಲಾಗಿದೆ. |

| | | |
|---|---|---|
| | | (ಹೆಣ್ಣು ಮಕ್ಕಳಿಗೆ 03, ಗಂಡು ಮಕ್ಕಳಿಗೆ 03) ಹಾಗೂ ಇವುಗಳನ್ನು ಹೊರತುಪಡಿಸಿ 06 ಮೂತ್ರಾಲಯಗಳನ್ನು ಸುಸ್ಥಿತಿಯಲ್ಲಿ (ಹೆಣ್ಣು ಮಕ್ಕಳಿಗೆ 03, ಗಂಡು ಮಕ್ಕಳಿಗೆ 03) ಒದಗಿಸಲಾಗಿದೆ. |
| ಇ) | ಮಾಗಡಿ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿ ಹಾಗೂ ತಾಲ್ಲೂಕು ಪಂಚಾಯಿತಿಯ ಕಾರ್ಯ ನಿರ್ವಹಕರ ಅಧಿಕಾರಿಗಳ ಮೇಲೆ ತಿಳಿಸಿದ ಶೌಚಾಲಯದ ಕಟ್ಟಡದ ಕಳಪೆ ಕಾಮಗಾರಿ ಮಾಡಿದ್ದು, ಈ ಇಬ್ಬರು ಅಧಿಕಾರಿಗಳು ಶಾಮೀಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದ್ದಲ್ಲಿ, ಯಾವ ಕ್ರಮ ಕೈಗೊಂಡಿದೆ. | ಬಿಸ್ಕೂರು ಗ್ರಾಮದಲ್ಲಿರುವ ಸರ್ಕಾರಿ ಶೌಚಾಲಯ ಕಟ್ಟಡದ ಕಳಪೆ ಕಾಮಗಾರಿಯಲ್ಲಿ ಶಾಮೀಲಾಗಿರುವ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಮಾಗಡಿ ತಾಲ್ಲೂಕು ರವರ ವಿರುದ್ಧ ಯಾವುದೇ ದೂರು ಬಂದಿರುವುದಿಲ್ಲ/ಶಿಸ್ತು ಪ್ರಕರಣ ಪ್ರಾರಂಭಿಸಿರುವುದಿಲ್ಲ. |

ಇಪಿ 266 ಪಿಎಂಸಿ 2021

[ಬಿ.ಸಿ.ನಾಗೇಶ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.